ಸಂಜೆವಾಣಿ





# ಸಿನಿ ಕಲಾವಿದರಿಂದ, ಅಭಿಮಾನಿಗಳಿಂದ ಮೊಳಗಿದ ಕನ್ನಡ ಡಿಂಡಿಮ

***By Bangalore_Newsroom -October 28, 2021***



ಬೆಂಗಳೂರು, ಅ.28- ರಾಜ್ಯದ 66ನೇ ರಾಜ್ಯೋತ್ಸವದ ಅಂಗವಾಗಿ ಸಿನಿಮಾ ಕಲಾವಿದರೂ ಸೇರಿದಂತೆ 750 ಕ್ಕೂ ಹೆಚ್ಚು ಕನ್ನಡಾಭಿಮಾನಿಗಳಿಂದ ಕನ್ನಡ ಡಿಂಡಿಮ ಮೊಳಗಿದೆ.

ಸಂಗೀತ ನಿರ್ದೇಶಕ ಮಹೇಶ್ ಮಹದೇವ್ ,ಗಾಯಕಿ ಡಾ. ಪ್ರಿಯದರ್ಶಿನಿ, ಕಲಾವಿದರಾದ ಗಣೇಶ್ ರಾವ್ ಕೇಸರ್ ಕರ್ ಸೇರಿದಂತೆ ಕಲಾವಿದರು ಕನ್ನಡ ಗೀತ ಗಾಯನದಲ್ಲಿ ಹಲವು ಮಂದಿ ಪಾಲ್ಗೊಳ್ಳುವ ಮೂಲಕ ನಾಡಿನ ಹಿರಿಮೆ ಗರಿಮೆಯನ್ನು ಮೊಳಗಿಸಿದರು.

ಕನ್ನಡ ರಾಜ್ಯೋತ್ಸವದ ಅಂಗವಾಗಿ ಮಾತಾಡ್ ಮಾತಾಡ್ ಕನ್ನಡ, ಕನ್ನಡಕ್ಕಾಗಿ ನಾವು ಅಭಿಯಾನದ ಪ್ರಯುಕ್ತ ಲಕ್ಷ ಕಂಠ ಗೀತೆಗಳ ಗಾಯನ ಡಾ.ರಾಜ್ ಗೋಕಾಕ್ ಚಳವಳಿ ಸ್ಮರಣಾರ್ಥ ವೃತ್ತದಲ್ಲಿ ಅದ್ದೂರಿಯಾಗಿ ಜರುಗಿತು.

750ಕ್ಕೂ ಹೆಚ್ಚು ಕನ್ನಡಭಿಮಾನಿಗಳಿಂದ ತಾಯಿ ಭುವನೇಶ್ವರಿಯ ಸ್ಮರಣೆ ಮಾಡಿ ಗೀತ ಗಾಯನದಲ್ಲಿ ಪಾಲ್ಗೊಂಡು ಕುವೆಂಪು ಅವರ ಬಾರಿಸು ಕನ್ನಡ ಡಿಂಡಿಮವ, ನಿಸಾರ್ ಅಹಮ್ಮದ್ ಅವರ ಜೋಗದ ಸಿರಿ ಬೆಳಕಿನಲ್ಲಿ ಹಾಗು ಡಾ. ಹಂಸಲೇಖ ಅವರ ಹುಟ್ಟಿದರೆ ಕನ್ನಡ ನಾಡಲ್ಲಿ ಹುಟ್ಟಬೇಕು ಗೀತೆ ಗಾಯನ ನಡೆಯಿತು.

ಹಿರಿಯ ಕಲಾವಿದರಾದ ಡಿಂಗ್ರಿ ನಾಗರಾಜ್, ಕಿರ್ಲೋಸ್ಕರ್ ಸತ್ಯ, ಗಣೇಶ್ ರಾವ್ ಕೇಸರ್ಕರ್, ಭರತ್ ಗೌಡ, ಕೆಂಪೇಗೌಡ,ಅಡಗೋಡಿ ಶ್ರೀನಿವಾಸ್, ಸುಮಂಗಲ ಕೇಶವ್, ಪೋಷಕಕಲಾವಿದರ ಸಂಘದ ಕಲಾವಿದರು ಸೇರಿದಂತೆ ಸುಮಾರು 750ಕ್ಕೂ ಹೆಚ್ಚು ಕನ್ನಡಾಭಿಮಾನಿಗಳು ಪಾಲ್ಗೊಂಡಿದ್ದರು.